# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1066 (957)

2) ಸದಸ್ಯರ ಹೆಸರು : ಶ್ರೀ ಲಹರ್ ಸಿಂಗ್ ಸಿರೋಯ್
(ವಿಧಾನ ಸಭೆಯಿಂದ ಚುನಾಯಿತರಾದವರು)

3) ಉತ್ತರಿಸುವ ದಿನಾಂಕ : 15-03-2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹುಲಿಗಳ ಸಂಖ್ಯೆ ಹೆಚ್ಚುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ರಾಜ್ಯದಲ್ಲಿ ಎಷ್ಟು ಹುಲಿಗಳಿವೆ; (ವಿವರ ನೀಡುವುದು) | ಬಂದಿದೆ.<br>ರಾಜ್ಯದಲ್ಲಿ 2018ರಲ್ಲಿ ನಡೆಸಿದ ಹುಲಿ ಗಣತಿ ಪ್ರಕಾರ ಒಟ್ಟು 524 ಹುಲಿಗಳು ಇರಬಹುದೆಂದು ಅಂದಾಜಿಸಲಾಗಿದೆ. |
| ಆ) | ಇದುವರೆವಿಗೂ ನಮ್ಮ ರಾಜ್ಯದಲ್ಲಿ ಹುಲಿ ಗಣತಿ ಮಾಡಲಾಗಿದೆಯೇ; (ವಿವರ ನೀಡುವುದು) | ರಾಷ್ಟ್ರೀಯ ಹುಲಿ ಸಂರಕ್ಷಣಾ ಪ್ರಾಧಿಕಾರ, ಕೇಂದ್ರ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ, ನವದೆಹಲಿ ಇವರ ಮಾರ್ಗದರ್ಶನದಂತೆ ಪ್ರತಿ 4 ವರ್ಷಗಳಿಗೊಮ್ಮೆ ರಾಜ್ಯದಲ್ಲಿ ಹುಲಿ ಗಣತಿ ಕಾರ್ಯವನ್ನು ಕೈಗೊಳ್ಳಲಾಗುತ್ತಿದ್ದು, ವಿವರ ಈ ಕೆಳಕಂಡಂತಿದೆ.<br><br>ವರ್ಷ — ಹುಲಿಗಳ ಸಂಖ್ಯೆ<br>2010 — 300<br>2014 — 406<br>2018 — 524 |
| ಇ) | ಹುಲಿಗಳ ಜೀವನ ವಿಧಾನದ ಬಗ್ಗೆ ಅರಣ್ಯ ಇಲಾಖೆ ಅಥವಾ ತಜ್ಞರಿಂದ ಯಾವುದಾದರೂ ಅಧ್ಯಯನ ನಡೆಸಲಾಗಿದೆಯೇ; (ವಿವರ ನೀಡುವುದು) | ಜಾರ್ಜ್ ಶೆಲ್ಲರ್ ಎಂಬುವವರು ಮಧ್ಯಪ್ರದೇಶದ ಕಾನ್ಹ ಹುಲಿ ಸಂರಕ್ಷಿತ ಪ್ರದೇಶದಲ್ಲಿ ಹುಲಿಗಳ ಕುರಿತು ಅಧ್ಯಯನ ನಡೆಸಿ "Deer and the Tiger" ಎನ್ನುವ ಕೃತಿಯನ್ನು ಪ್ರಕಟಿಸಿದ್ದು, ಇದು ಹುಲಿಗಳ ಕುರಿತು ತಿಳಿದುಕೊಳ್ಳಲು ಸಹಕಾರಿಯಾಗಿದೆ. Smithsonian, USA ಸಂಸ್ಥೆಯು ನೇಪಾಳದ Chitwan National Park ನಲ್ಲಿ ನಡೆಸಿರುವ ಅಧ್ಯಯನವು ಎಲ್ಲಾ ಹುಲಿ ಸಂರಕ್ಷಿತ ಪ್ರದೇಶಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳಿಗೆ ಮಾರ್ಗಸೂಚಿಯಾಗಿದೆ. ಇದಲ್ಲದೇ, ಕರ್ನಾಟಕ ಅರಣ್ಯ ಇಲಾಖೆಯು Camera Trap ನಿಂದ ಮಾಹಿತಿಯನ್ನು ಕಲೆಹಾಕಿ ಹುಲಿಗಳ ಆರೋಗ್ಯ ಸ್ಥಿತಿ, ನಡವಳಿಕೆ ಮತ್ತು ವಯಸ್ಸನ್ನು ಕೂಡಾ |

ಪತ್ತೆ ಹಚ್ಚಲಾಗುತ್ತಿದೆ. ಇದಕ್ಕಾಗಿ ವಿಶೇಷವಾಗಿ Tiger Cell ಅನ್ನು ಕೇಂದ್ರ ಕಛೇರಿಯಲ್ಲಿ ತೆರೆಯಲಾಗಿದೆ. ಕರ್ನಾಟಕ ಅರಣ್ಯ ಇಲಾಖೆಯು ಭಾರತೀಯ ವನ್ಯಜೀವಿ ಸಂಸ್ಥೆ, ಡೆಹರಾಡೂನ್ ಇವರಿಗೆ ಮಾನವ–ಹುಲಿ–ಸಂಘರ್ಷ ಸೇರಿದಂತೆ, ಹುಲಿಗಳ ಕುರಿತು ಸಮಗ್ರ ಅಧ್ಯಯನಕ್ಕಾಗಿ ಅನುಮತಿ ನೀಡಿದೆ.

ಅಲ್ಲದೇ, ವನ್ಯಜೀವಿ ಸಂರಕ್ಷಣಾ ಸಂಸ್ಥೆಯು ಕರ್ನಾಟಕ ಅರಣ್ಯ ಇಲಾಖೆಯ ಜೊತೆ 2 ವರ್ಷದಿಂದ ನಾಗರಹೊಳೆ, ಬಿ.ಆರ್.ಟಿ. ಕಾಳಿ ಹುಲಿ ಸಂರಕ್ಷಿತ ಪ್ರದೇಶಗಳಲ್ಲಿ ಹುಲಿಗಳ ಚಲನವಲನ, ನಡವಳಿಕೆ, ಆಹಾರ ಪದ್ಧತಿ ಕುರಿತು ಅಧ್ಯಯನ ಮಾಡಿ ಹಲವಾರು ವೈಜ್ಞಾನಿಕ ಪ್ರಕಟಣೆಗಳನ್ನು ತಂದಿರುತ್ತದೆ.

ಈ) ರಾಜ್ಯದ ಯಾವ ಯಾವ ಜಿಲ್ಲೆಗಳಲ್ಲಿ ಹುಲಿ ದಾಳಿ ಪ್ರಕರಣಗಳು ವರದಿಯಾಗಿವೆ; 2015 ರಿಂದ 2020ರವರೆಗೆ ಹುಲಿ ದಾಳಿಯಿಂದ ಸಂಭವಿಸಿದ ಸಾವು–ನೋವು ಎಷ್ಟು? (ಜಿಲ್ಲಾವಾರು ವಿವರ ನೀಡುವುದು)

ರಾಜ್ಯದಲ್ಲಿ 2015 ರಿಂದ 2020ರ ಅವಧಿಯಲ್ಲಿ ಹುಲಿ ದಾಳಿಯಿಂದ ಉಂಟಾದ ಮಾನವ–ಪ್ರಾಣಹಾನಿ ಪ್ರಕರಣಗಳ ಜಿಲ್ಲಾವಾರು ವಿವರಗಳು ಈ ಕೆಳಗಿನಂತಿದೆ.

| ವರ್ಷ | ಜಿಲ್ಲೆ | | |
|---|---|---|---|
| | ಕೊಡಗು (ನಾಗರಹೊಳೆ) | ಕೊಡಗು (ವೀರಾಜಪೇಟೆ) | ಚಾಮರಾಜನಗರ (ಬಂಡೀಪುರ) |
| 2015–16 | – | – | 2 |
| 2016–17 | – | – | – |
| 2017–18 | – | – | – |
| 2018–19 | 3 | – | – |
| 2019–20 | – | – | 2 |
| 2020–21 | 1 | 3 | – |

ಸಂಖ್ಯೆ: ಅಪಜೀ 45 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು